CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೦೫ (ಮಾಘ ೨೧, ಶಕ ವರ್ಷ ೧೯೨೬) | ಸಂಚಿಕೆ ೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪ ವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ :** ಸೇಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ., ತುಮಕೂರು ಇವರ ದಾವಾ ಸಂಖ್ಯೆ: 124/2003-04 ಮತ್ತು ಅಮುಲ್ಜಾರಿ ಸಂಖ್ಯೆ: 516/2003-04 ಶ್ರೀಮತಿ ಆರ್. ಸುಮಿತ್ರ ಕೋಂ ಲೇಟ್ ಕೆ. ಎಸ್. ರಮೇಶ್ ಹೆಗ್ಗೆರೆ, ತುಮಕೂರು, ಸ್ಥಿರಾಸ್ತಿಯನ್ನು ಸೇಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ ತುಮಕೂರು, ಈ ಸಂಘದ ಹೆಸರಿಗೆ ವರ್ಗಾವಣೆ ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ :** 1. ಮಾರಾಟಾಧಿಕಾರಿಗಳು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಇವರ ಪತ್ರ ದಿನಾಂಕ: 13.9.2004.

2. ಈ ಕಛೇರಿಯ ನೋಟೀಸ್ ಸಂಖ್ಯೆ: ಅಮುಲ್ಜಾರಿ ಸಂಖ್ಯೆ: 516/2003-04 ದಿನಾಂಕ: 2.11.2004.

ಶ್ರೀಮತಿ ಆರ್. ಸುಮಿತ್ರ ಕೋಂ ಲೇಟ್ ಕೆ. ಎಸ್. ರಮೇಶ್ ಹೆಗ್ಗೆರೆ ಇವರು ಸೇಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ, ತುಮಕೂರು ಈ ಸಂಘದಲ್ಲಿ ಸಾಲ ಪಡೆದು ಸುಸ್ತಿಯಾದ ಹಿನ್ನೆಲೆಯಲ್ಲಿ ದಿನಾಂಕ 11.11.2003 ರಂದು ದಾವಾ ಸಂಖ್ಯೆ: 124/2003-04 ರೀತ್ಯಾ ಡಿಕ್ರಿ ಪಡೆದು, ಅಮುಲ್ಜಾರಿ ಕ್ರಮ ಜರುಗಿಸಿ ಅಮುಲ್ಜಾರಿ ಬಾಕಿ ರೂ. 5,40,808/- ರೂ.ಗಳನ್ನು ವಸೂಲಿ ಮಾಡಿಕೊಳ್ಳಲು ಶ್ರೀಮತಿ ಆರ್. ಸುಮಿತ್ರ ಕೋಂ ಲೇಟ್ ಕೆ. ಎಸ್. ರಮೇಶ್ ಹೆಗ್ಗೆರೆ, ತುಮಕೂರು ಇವರ ಸ್ತಿರಾಸ್ಥಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 24.6.2004, 3.7.2004, ದಿನಾಂಕಗಳಂದು ನಿಗದಿಪಡಿಸಿ ಬಹಿರಂಗ ಹರಾಜು ಮಾಡಲಾಯಿತು. ಆದರೆ ಸದರಿ ದಿನಾಂಕಗಳಂದು ಹರಾಜಿನಲ್ಲಿ ಬಿಡ್ಡುದಾರರು ಯಾರು ಭಾಗವಹಿಸದೆ ಇದ್ದ ಪ್ರಯುಕ್ತ ಬಹಿರಂಗ ಹರಾಜನ್ನು ಮುಂದೂಡಲಾಯಿತು. ಅಂತಿಮವಾಗಿ ದಿನಾಂಕ: 10.8.04 ರಂದು ನಿಯಮಾನುಸಾರ ಹರಾಜು ನಿಗದಿಪಡಿಸಿ ಹರಾಜು ಮಾಡಲಾಗಿ ಸದರಿ ಬಹಿರಂಗ ಹರಾಜಿನಲ್ಲಿ ಯಾರೂ ಬಿಡ್ಡುದಾರರು ಭಾಗವಹಿಸದೆ ಇದ್ದ ಪ್ರಯುಕ್ತ ಸದರಿ ಹರಾಜಿನಲ್ಲಿ ಸಂಘದ ಅಧ್ಯಕ್ಷರು ಮತ್ತು ವ್ಯವಸ್ಥಾಪಕರು ಭಾಗವಹಿಸಿ ಸಂಘಕ್ಕೆ ಬಾಕಿ ಇರುವ ಮೊತ್ತ ರೂ. 5,40,808/- ಗಳಿಗೆ ಸದರಿ ಸ್ತಿರಾಸ್ಥಿಯನ್ನು ಸಂಘದ ಹೆಸರಿಗೆ ವರ್ಗಾವಣೆ ಸ್ಥಿರೀಕರಣಗೊಳಿಸಲು ಕೋರಿದ್ದರ ಮೇರೆಗೆ ಮಾರಾಟಾಧಿಕಾರಿಗಳು ಉಲ್ಲೇಖ(1)ರಲ್ಲಿ ನಮೂದಿಸಿರುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿಗಳು 1960ರ ನಿಯಮ 38 (ಎ) (3) ರ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ನೀಡಿ ಶ್ರೀಮತಿ ಆರ್. ಸುಮಿತ್ರ ಕೋಂ ಲೇಟ್ ಕೆ. ಎಸ್. ರಮೇಶ್ ಇವರಿಗೆ ದಿನಾಂಕ: 2.11.04 ರಂದು ನೋಟಿಸ್ ನೀಡಲಾಗಿತ್ತು. ಆದರೆ ಸದರಿಯವರು ಈ ಬಗ್ಗೆ ಆಕ್ಷೇಪಣೆ ಸಲ್ಲಿಸಲು ವಿಫಲರಾದ ಪ್ರಯುಕ್ತ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ**

**ಕ್ರಮಸಂಖ್ಯೆ: ಎಆರ್‌ಟಿ:ಡಿಎಸ್: ಡಿಎಕ್ಸ್ಎನ್: ಸ್ಥಿರೀಕರಣ:5:2004-05 ದಿನಾಂಕ: 28ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 89(ಎ)(2) ಮತ್ತು ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38 (6) (ಎ) ಪ್ರಕಾರ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ, 69 ಸಿಎಲ್ಎಂ 2001 ದಿನಾಂಕ: 21.11.2001ರ ಪ್ರಕಾರ ಪ್ರತ್ಯೋಜಿಸಲ್ಪಟ್ಟಿರುವ ನನಗೆ ದತ್ತವಾಗಿ ಅಧಿಕಾರವನ್ನು ಚಲಾಯಿಸುತ್ತಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಆದ ನಾನು ಸೇಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ, ತುಮಕೂರು, ಇದರ ದಾವಾ ಸಂಖ್ಯೆ: 124/2003-04 ಮತ್ತು ಅಮುಲ್ಜಾರಿ ಸಂಖ್ಯೆ 516/2003-04 ರಂತೆ ಶ್ರೀಮತಿ ಆರ್. ಸುಮಿತ್ರ ಕೋಂ ಲೇಟ್ ಕೆ. ಎಸ್. ರಮೇಶ್ ಹೆಗ್ಗೆರೆ, ತುಮಕೂರು ತಾಲ್ಲೂಕು

ಕಸಬಾ ಹೋಬಳಿ, ಹೆಗ್ಗೆರೆ ಗ್ರಾಮದ ಸರ್ವೆ ನಂ. 24.6 ಸೈಟು ನಂ. 7, ಮುನ್ಸಿಪಲ್ ಖಾತೆ ನಂ. 2377 ಅಸೆಸ್‌ಮೆಂಟ್ ನಂ. 524.6 ವುಳ್ಳದ್ದರ ಪೂರ್ವ, ಪಶ್ಚಿಮ, ಉತ್ತರದ ಕಡೆ-48 ಅಡಿ, ದಕ್ಷಿಣದ ಕಡೆ-37 ಅಡಿ, ಹಾಗೂ ಉತ್ತರ ದಕ್ಷಿಣ 30 ಅಡಿಯುಳ್ಳ ಕಟ್ಟಿರತಕ್ಕ ಆರ್.ಸಿ.ಸಿ. ಮನೆ ಹಾಗೂ ಉಳಿಕೆ ಜಾಗ, ಈ ಸ್ಥಿರಾಸ್ತಿಯನ್ನು ಸೆಕ್ರೇಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ, ತುಮಕೂರು, ಈ ಸಂಘದ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶವನ್ನು, ಷರತ್ತು ಮತ್ತು ನಿಯಮಗಳಿಗೆ ಅನ್ವಯ ಸ್ಥಿರೀಕರಣ ಆದೇಶ ನೀಡಿದೆ. ಈ ಆದೇಶಕ್ಕೆ ನಿಗದಿತ ನಮೂನೆ VIII ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷರತ್ತು ಮತ್ತು ನಿಯಮಗಳು:**

1. ಸಂಘಕ್ಕೆ ವರ್ಗಾವಣೆ ಮಾಡಲಾದ ಸ್ಥಿರಸ್ವತ್ತನ್ನು ಉಪಯೋಗಿಸತಕ್ಕದ್ದು.
2. ಸದರಿ ಸ್ಥಿರಾಸ್ತಿಯನ್ನು ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸದರಿಯವರ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3. ಈ ಮೇಲ್ಕಂಡ ವರ್ಗಾವಣೆ ಆದೇಶ ತಲುಪಿದ 1 ವಾರದೊಳಗಾಗಿ ಮಾರಾಟದ ಹಣವನ್ನು ಸಂಘಕ್ಕೆ ಜಮಾ ಖರ್ಚು ಮಾಡಿಕೊಳ್ಳತಕ್ಕದ್ದು.

ಈ ಕಛೇರಿ ಮುದ್ರೆ ಹಾಗೂ ನನ್ನ ಹಸ್ತಾಕ್ಷರದೊಂದಿಗೆ ದಿನಾಂಕ: 28.12.2004 ರಂದು ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ನಮೂನೆ-VIII**

**ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38 (ಎ) ಸಹಕಾರ**
**ಸಂಘಗಳ ಕಾಯ್ದೆ 1959 ರ ಕಲಂ 101ರ ಅನ್ವಯ ಪರಬಾಕಿ ಬಗ್ಗೆ**
**ಪ್ರಮಾಣ ಪತ್ರ**

ಸೇಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ, ತುಮಕೂರು, ಇದರ ವ್ಯವಸ್ಥಾಪಕರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀಮತಿ ಆರ್. ಸುಮಿತ್ರ ಕೋಂ ಲೇಟ್ ಕೆ. ಎಸ್. ರಮೇಶ್ ಹೆಗ್ಗೆರೆ, ತುಮಕೂರು ಇವರ ಸ್ಥಿರ ಸ್ವತ್ತು ಮಾರಾಟದ ದಿನಾಂಕ: 10.8.04 ರಂದು ಬಹಿರಂಗ ಹರಾಜಿನಲ್ಲಿ ಇಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು, ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟಮಾಡಲಾಗಲಿಲ್ಲ ಎಂಬುದಾಗಿ ವಸೂಲಾತಿ ಅಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ. ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಮತ್ತು ಅಧಿಕಾರ ನಾಮ ಮತ್ತು ಬಾಧ್ಯತೆ ಸೇಕ್ರೆಡ್ ಹಾರ್ಟ್ ಪತ್ತಿನ ಸಹಕಾರ ಸಂಘ ನಿಯಮಿತ ತುಮಕೂರು, ಇವರಿಗೆ ನಿರ್ದಿಷ್ಟವಾಗಿರತಕ್ಕದ್ದು ಎಂದು ಮತ್ತು ಈ ಆದೇಶಕ್ಕೆ ಇಲ್ಲಿ ಸೇರಿಸಲ್ಪಟ್ಟು ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101 ಬಿ ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಸ್ವತ್ತಿನ ವಿವರಗಳು**

ತುಮಕೂರು ತಾಲ್ಲೂಕು, ಕಸಬಾ ಹೋಬಳಿ ಹೆಗ್ಗೆರೆ ಗ್ರಾಮದ ಸರ್ವೇ ನಂ. 24.6 ಸೈಟ್ ನಂ. 7, ಮುನ್ಸಿಪಲ್ ಖಾತೆ ನಂ. 2377, ಅಸೆಸ್‌ಮೆಂಟ್ ನಂ. 524.6 ವುಳ್ಳದ್ದರ, ಅಳತೆ ಪೂರ್ವ, ಪಶ್ಚಿಮ, ಉತ್ತರದ ಕಡೆ 48 ಅಡಿಗಳು, ದಕ್ಷಿಣದ ಕಡೆ 37 ಅಡಿ, ಹಾಗೂ ಉತ್ತರ ದಕ್ಷಿಣ 30 ಅಡಿಯುಳ್ಳ ಕಟ್ಟಿರತಕ್ಕ ಆರ್.ಸಿ.ಸಿ. ಮನೆ ಹಾಗೂ ಉಳಿಕೆ ಜಾಗಕ್ಕೆ ಚೆಕ್ಕುಬಂದಿ ಪೂರ್ವಕ್ಕೆ ರಸ್ತೆ, ಪಶ್ಚಿಮಕ್ಕೆ 8ನೇ ನಂ. ಸೈಟ್, ಉತ್ತರಕ್ಕೆ ತಳವಾರಿಕೆ ಇನಾಂತಿ ಜಮೀನು ದಕ್ಷಿಣಕ್ಕೆ 6ನೇ ನಂ. ಸೈಟ್ ಈ ಮಧ್ಯೆ ಇರುವ ಸ್ವತ್ತು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಪಿ.ಆರ್.135 ತುಮಕೂರು ಉಪವಿಭಾಗ, ತುಮಕೂರು.

**ತಹಶೀಲ್ದಾರ್‌ರವರ ಕಛೇರಿ, ಉಡುಪಿ**

**ಕಲಂ 71 ರನ್ವಯ-ನಿಯಮ 94 ರನ್ವಯ ಘೋಷಣೆ**

**ಹೆಚ್‌ಎಸ್‌ಡಿಆರ್ 29:00-01 ದಿನಾಂಕ: 24ನೇ ಡಿಸೆಂಬರ್ 2004**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಲಾಗಿರುವ ಸಾರ್ವಜನಿಕ "ಪೊರಂಬೋಕು ದಾರಿ" ಯು ಸರಕಾರದ ಸ್ವತ್ತಾಗಿದ್ದು, ಅದು ಸಾರ್ವಜನಿಕ ಬಳಕೆಗಾಗಿ ಅವಶ್ಯಕವಿಲ್ಲವೆಂದು ಕಂಡು ಬಂದಿದೆ.

ಪ್ರಯುಕ್ತ ಈಗ ಕರ್ನಾಟಕ ಸರಕಾರದವರು ಕರ್ನಾಟಕ ಭೂಕಂದಾಯ ಅಧಿನಿಯಮದ 68ನೆಯ ಪ್ರಕರಣದ (1)ನೆಯ ಉಪ ಪ್ರಕರಣದಿಂದ ಕೊಡ ಮಾಡಲಾದ ಅಧಿಕಾರಗಳನ್ನು ಉಪಯೋಗಿಸಲಾಗಿತ್ತು. ಪೂರ್ವೋಕ್ತ ಸಾರ್ವಜನಿಕ ದಾರಿಯ ಭಾಗವು ಸಾರ್ವಜನಿಕ ಉಪಯೋಗಕ್ಕಾಗಿ ಅವಶ್ಯಕತೆ ಇಲ್ಲ ಮತ್ತು ಪೂರ್ವೋಕ್ತ ಸಾರ್ವಜನಿಕ ದಾರಿಯಲ್ಲಿ ಸಾರ್ವಜನಿಕರಿಗೆ ಅಥವಾ ಎಲ್ಲಾ ವ್ಯಕ್ತಿಗಳಿಗೆ ಇರುವಂತ ಹಕ್ಕುಗಳು ರದ್ದುಗೊಳಿಸತಕ್ಕದೆಂದು ಈ ಮೂಲಕ ಘೋಷಿಸಲಾಗಿದೆ.

ಈ ಜಮೀನು 'ಬಿ' ಖರಾಬ್ ಜಮೀನಾದ್ದರಿಂದ, ನಿವೇಶನ ಮಂಜೂರು ಮಾಡಲು ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಕಲಂ 71 ರನ್ವಯ ವಿರಹಿತ ಪಡಿಸಬೇಕಾಗಿರುವುದರಿಂದ, ಸಾರ್ವಜನಿಕ ದಾರಿಯ ಮೇಲೆ ಹಾಯ್ದು ಹೋಗುವ ಅಧಿಕಾರವನ್ನು ಇತರ ಯಾವೊಂದು ಹಿತಾಸಕ್ತಿಯನ್ನುಳ್ಳ ಅಥವಾ ಯಾವೊಬ್ಬ ವ್ಯಕ್ತಿಯು ಅಥವಾ ಇಂಥ ಪ್ರಸ್ತಾಪದಿಂದ ಅನ್ಯಥಾ ಬಾಧಿತವಾಗುವ ಅಥವಾ ಯಾವೊಂದು ಹಿತಾಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯು ಈ ತಿಳುವಳಿಕೆ ಪತ್ರ (ನೋಟೀಸು)ವು ಹೊರಟ ದಿನಾಂಕದಿಂದ ತೊಂಭತ್ತು ದಿನಗಳೊಳಗಾಗಿ ಉಡುಪಿ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಆ ಪ್ರಸ್ತಾವದ ಬಗ್ಗೆ ತನಗಿರುವ ಆಕ್ಷೇಪಗಳ ಕುರಿತು ವಿವರಗಳನ್ನು ಸಲ್ಲಿಸತಕ್ಕದ್ದು. ಸದ್ರಿ ಆಕ್ಷೇಪಣೆಗಳು ಮತ್ತು ಹಕ್ಕುಗಳ ಬಗ್ಗೆ ಕಾಯ್ದೆಯಲ್ಲಿ ತಿಳಿಸಿದ ಪ್ರಕಾರ ಜಿಲ್ಲಾಧಿಕಾರಿಗಳಿಂದ ಪರಿಶೀಲಿಸಲಾಗುವುದು.

| | | |
|---|---|---|
| ಪೊರಂಬೋಕು ದಾರಿ ಇರುವ ಗ್ರಾಮ | : | ಪಡು |
| ತಾಲ್ಲೂಕು | : | ಉಡುಪಿ |
| ಜಿಲ್ಲೆ | : | ಉಡುಪಿ |

| | | |
|---|---|---|
| ದಾರಿಯ ವಿವರ ವಿಸ್ತೀರ್ಣ | : | ಸ.ನಂ. 43-ಸಿ2 ರಲ್ಲಿ 0-20 ಎಕರೆ |
| ಎಲ್ಲೆಗಳು - ಉತ್ತರ | : | ಸ.ನಂ. 43-ಡಿ1 |
| ದಕ್ಷಿಣ | : | ಸ.ನಂ. 43-ಇ1 |
| ಪೂರ್ವ | : | ಸ.ನಂ. 42-2ಎ2 |
| ಪಶ್ಚಿಮ | : | ಸ.ನಂ. 34-6 |

ಪಿ.ಆರ್.136 ತಹಶೀಲ್ದಾರರು, ಉಡುಪಿ.

**DEPARTMENT PERSONNEL AND ADMINISTRATIVE REFORMS**

**NOTIFICATION**

**No. DPAR 166 SFP 2004 Bangalore, dated: 1st January 2005**

In the notification of even number dated 13.12.2004 for the words 'Planning, Science & Technology' the words "Science and Technology" shall be and shall always be substituted.

By Order and in the Name of the Governor of Karnataka,

**K. SUDHAKARASHETTY**

PR-137 Under Secretary to Government, DPAR (Services-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ ಸಂಖ್ಯೆ: ಸಿಆಸುಇ 319 ಸಆಸೇ 2004, ಬೆಂಗಳೂರು, ದಿನಾಂಕ: 3ನೇ ಜನವರಿ 2005**

ಶ್ರೀ ಪಿ. ಕೃಷ್ಣಮೂರ್ತಿ ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಅಪರಾಧಗಳು) ಕರ್ನಾಟಕ ಸರ್ಕಾರ ಸಚಿವಾಲಯ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 285 (1) (ಎ)ರ ಅನ್ವಯ ಈ ಆದೇಶದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಸ್ವಇಚ್ಛೆ ಮೇರೆಗೆ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.138 **ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು, ಇವರ ನಡವಳಿಗಳು**

**ವಿಷಯ :** ಸಮಾಪನೆಯಲ್ಲಿರುವ ತುಮಕೂರು ಜಿಲ್ಲಾ ರೇಷ್ಮೆಗೂಡು ಬಿಚ್ಚುವ ಹಾಗೂ ಹುರಿ ಉತ್ಪಾದನಾ ಮತ್ತು ಮಾರಾಟ ಮಾಡುವವರ ಸಹಕಾರ ಸಂಘ ನಿಯಮಿತ, ತುಮಕೂರು, ಇದರ ನೋಂದಣಿ ಕ್ರಮಾಂಕ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಸಮಾಪನಾದೇಶ ಸಂಖ್ಯೆ: ಸಮಾಪನೆ: 131: 98-99, ದಿನಾಂಕ: 04.12.1998.
2. ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು, ಇವರ ಪತ್ರಸಂಖ್ಯೆ: ಡಿಆರ್‌ಬಿ: ಡಿಎಲ್‌ಎಸ್: 29:99-00 ದಿನಾಂಕ: 29.08.2002.
3. ದಿನಾಂಕ: 30.07.2002 ರಂದು ಸಮಾಪನಾಧಿಕಾರಿಗಳು ನಡೆಸಿದ ಸಭಾ ನಡವಳಿಗಳು.

**ಪೀಠಿಕೆ:**

ತುಮಕೂರು ಜಿಲ್ಲಾ ರೇಷ್ಮೆ ಗೂಡು ಬಿಚ್ಚುವ ಹಾಗೂ ಹುರಿ ಉತ್ಪಾದನಾ ಮತ್ತು ಮಾರಾಟ ಮಾಡುವವರ ಸಹಕಾರ ಸಂಘ ನಿಯಮಿತ, ತುಮಕೂರು, ಈ ಸಹಕಾರ ಸಂಘವು ನೋಂದಣಿ ಕ್ರಮಸಂಖ್ಯೆ: ಜೆಆರ್‌ಬಿ:ಸಿಆರ್‌ಡಿ:ಆರ್‌ಜಿಎನ್:32:4911:82-83, ದಿನಾಂಕ: 28.02.1983 ರಂದು ನೋಂದಾಯಿಸಲ್ಪಟ್ಟಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯು ತುಮಕೂರು ಜಿಲ್ಲಾ ವ್ಯಾಪ್ತಿಗೆ ಸೀಮಿತವಾಗಿರುತ್ತದೆ. ಸದರಿ ಸಂಘವು ನೋಂದಣಿಯಾದಾಗಿನಿಂದಲೂ ಉದ್ದೇಶದ ರೀತ್ಯಾ ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದಲ್ಲಿ ವಾರ್ಷಿಕ ಸರ್ವ ಸಾಧಾರಣ ಸಭೆಯಾಗಲೀ ಆಡಳಿತ ಮಂಡಳಿಯ ಸಭೆಗಳಾಗಲೀ ಜರುಗಿಸಿರುವುದಿಲ್ಲ. ಸಂಘದ ಆಡಿಟ್ ವರ್ಗೀಕರಣವು "ಡಿ" ವರ್ಗದಲ್ಲಿರುತ್ತದೆ. ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಸಂಘವನ್ನು ನಡೆಸಿಕೊಂಡುಹೋಗಲು ಆಸಕ್ತಿ ಇಲ್ಲದಿರುವ ಕಾರಣ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)(ಬಿ) ರನ್ವಯ ಈ ಕಛೇರಿಯ ಆದೇಶ ಸಂಖ್ಯೆ: ಸಮಾಪನೆ:131:98-99, ದಿನಾಂಕ: 4.12.1998ರಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು (ಮಾರುಕಟ್ಟೆ), ಸಹಕಾರ ಸಂಘಗಳ ಉಪನಿಬಂಧಕರವರ ಕಛೇರಿ, ತುಮಕೂರು, ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಲಾಗಿತ್ತು.

ಉಲ್ಲೇಖ (3)ರಂತೆ ಸಮಾಪನಾಧಿಕಾರಿಗಳು ದಿನಾಂಕ: 30.07.2002 ರಂದು ನಡೆಸಿದ ಸಭಾ ನಡವಳಿಕೆಯಲ್ಲಿ ಸಂಘದ ಸದಸ್ಯರ ಷೇರು ಹಣ ದಿನಾಂಕ: 31.03.2002ಕ್ಕೆ ರೂ. 12,000/- ಇದ್ದು ಇದನ್ನು ಸದಸ್ಯರಿಗೆ ಮರುಪಾವತಿಸಲು ದಿನಾಂಕ: 23.06.2002 ರಂದು ಪ್ರಜಾಪ್ರಗತಿ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದು, ಯಾವ ಸದಸ್ಯರು ಷೇರು ಹಣ ವಾಪಸ್ಸು ಪಡೆಯಲು ಹಾಜರಾಗದ ಕಾರಣ ಮರುಪಾವತಿ ಮಾಡಿರುವುದಿಲ್ಲ. ಉಳಿಕೆ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ವಿವರಗಳು ಇಲ್ಲದ್ದರಿಂದ ವಿಲೇವಾರಿ ಆಗಿಲ್ಲ ಎಂದು ತಿಳಿಸಿರುತ್ತಾರೆ. ಸಂಘದಲ್ಲಿ ಸರ್ಕಾರದ ಷೇರು ರೂ. 10,000/-ಗಳನ್ನು ಚಲನ್ ನಂ. 56, ದಿನಾಂಕ: 24.01.2000ರ ಮೇರೆಗೆ ಸರ್ಕಾರಕ್ಕೆ ಮರುಪಾವತಿ ಮಾಡಿರುತ್ತಾರೆ. ಹಾಗೂ ಆಡಿಟ್ ಫೀ ರೂ.100 ನ್ನು ಚಲನ್ ನಂ. 55, ದಿನಾಂಕ: 24.01.2000ರ ವರೆಗೆ ಸರ್ಕಾರಕ್ಕೆ ಪಾವತಿಸಿರುತ್ತಾರೆ.

ಸಮಾಪನಾ ನಡವಳಿಕೆ ಪೂರ್ಣಗೊಳಿಸಿದ ನಂತರ ಉಳಿದ ಹಣ ರೂ. 28,857.21 ಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ಪಿ.ಡಿ.ಖಾತೆ ಸಂಖ್ಯೆ: 2580ಕ್ಕೆ ದಿನಾಂಕ: 30.07.2002 ರಂದು ಚಲನ್ ನಂ. 50ರ ರೀತ್ಯ ಪಾವತಿ ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕರಿಗಾಗಲೀ ಅಥವಾ ಸದಸ್ಯರಿಗಾಗಲೀ ಯಾವುದೇ ಪ್ರಯೋಜನಕಾರಿಯಾಗಿಲ್ಲವೆಂದು ಮನಗಂಡು ಸದರಿ ಸಮಾಪನಾ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸಮಂಜಸವೆಂದು ಪರಿಭಾವಿಸಿ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಎಲ್‌ಕ್ಯೂಡಿ:131:98-99 ದಿನಾಂಕ: 13ನೇ ಜನವರಿ 2005**

ಪೀಠಿಕೆಯಲ್ಲಿ ಪ್ರತಿಪಾದಿಸಲಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75ರಡಿ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ತುಮಕೂರು ಜಿಲ್ಲಾ ರೇಷ್ಮೆಗೂಡು ಬಿಚ್ಚುವ ಹಾಗೂ ಹುರಿ ಉತ್ಪಾದನಾ ಮತ್ತು ಮಾರಾಟ ಮಾಡುವವರ ಸಹಕಾರ ಸಂಘ ನಿಯಮಿತ, ತುಮಕೂರು ಇದರ ನೋಂದಣಿ ಸಂಖ್ಯೆ: ಜೆಆರ್‌ಬಿ:ಸಿಆರ್‌ಡಿ: ಆರ್‌ಜಿಎನ್:32:4911:82-83, ದಿನಾಂಕ: 28.02.1983ನ್ನು ರದ್ದುಪಡಿಸಿರುತ್ತೇನೆ. ಈ ನೋಂದಣಿ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು, ಸಂಘವು ಅಸ್ತಿತ್ವದಲ್ಲಿಲ್ಲದೇ ವಿಸರ್ಜಿತವಾಗಿದೆಯೆಂದು ಪರಿಗಣಿಸತಕ್ಕದ್ದು.

ಈ ಆದೇಶವು ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 13.01.05 ರಂದು ಹೊರಡಿಸಲಾಗಿದೆ.

ಬಿ. ನಾಗರಾಜ

ಪಿ.ಆರ್.139 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಎಫ್-16:2005 ದಿನಾಂಕ: 6ನೇ ಜನವರಿ 2005**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಗೌಸಿಯಾಬೇಗಂ ಗಂಡ ಅಲ್ಲಾಬಕ್ಷ | | 1. ಶ್ರೀ ಎಸ್. ನೂರಬಾಷಾ ತಂದೆ ಮೆಹಬೂಬಸಾಬ ಡಿ. ಎಲ್. ಶೆಟ್ಟಿ ಕಂಪೌಂಡ್ ಬಳ್ಳಾರಿ |
| 2) ಅಸ್ಲಾ ಅಂಜುಮ ತಂದೆ ಅಲ್ಲಾಬಕ್ಷ ಹಾಲಿವಸ್ತಿ: ಕೊಪ್ಪಳ | | 2. ದಿ. ಡಿವಿಜನಲ್ ಮ್ಯಾನೇಜರ್ ಓರಿಯೆಂಟಲ್ ಇನ್ಶೂರೆನ್ಸ್ ಕಂ.ಲಿ., ಗುಲಬರ್ಗಾ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ಅಲ್ಲಾಬಕ್ಷ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 1.9.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ಅಲ್ಲಾಬಕ್ಷರವರ ವಾರಸುದಾರರಾದ ಶ್ರೀ:ಶ್ರೀಮತಿ: ಗೌಸಿಯಾಬೇಗಂ ಮತ್ತು ಇನ್ನೊಬ್ಬರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳಾಗಲಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್.142 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್‌ಆರ್‌ಎಫ್:ಸಿಆರ್:97/04-05: ದಿನಾಂಕ: 29ನೇ ಡಿಸೆಂಬರ್ 2004**

**ವಿಷಯ :** ಮಲ್ಲಿಗೆ ಎಜ್ಯುಕೇಷನ್ ಫೌಂಡೇಷನ್ ಟ್ರಸ್ಟ್, ನಂ. 31, ಕ್ರಿಸೆಂಟ್ ರಸ್ತೆ, ಬೆಂಗಳೂರು-560001, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರು ಹೆಸರುಘಟ್ಟ ಹೋಬಳಿ, ಹುರುಳಿ ಚಿಕ್ಕನಹಳ್ಳಿ ಗ್ರಾಮದ ಸ.ನಂ. 71 ಮತ್ತು 136/1ರಲ್ಲಿ ಒಟ್ಟು 9-30 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಮಲ್ಲಿಗೆ ಎಜ್ಯುಕೇಷನ್ ಫೌಂಡೇಷನ್ ಟ್ರಸ್ಟ್, ನಂ. 31, ಕ್ರಿಸೆಂಟ್ ರಸ್ತೆ, ಬೆಂಗಳೂರು-560001, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರು ಹೆಸರುಘಟ್ಟ ಹೋಬಳಿ, ಹುರುಳಿ ಚಿಕ್ಕನಹಳ್ಳಿ ಗ್ರಾಮದ ಸ.ನಂ. 71 ಮತ್ತು 136/1 ರಲ್ಲಿ ಒಟ್ಟು 9-30 ಎಕರೆ:ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪ ವಿಭಾಗರವರ ಪತ್ರದ ನಂ: ಎಲ್‌ಆರ್‌ಎಫ್ (ಬಿಎನ್‌ಎ):ಸಿಆರ್: 123/04-05 ದಿನಾಂಕ: 15.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 71 ಮತ್ತು 136/1 ರಲ್ಲಿ ಒಟ್ಟು 9-30 ಎಕರೆ:ಗುಂಟೆ ಜಮೀನನ್ನು ದಾನವಾಗಿ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳ ಕಛೇರಿ, ಗಾಂಧಿನಗರ, ಉಪನೋಂದಣಾ ಕಛೇರಿಯಲ್ಲಿ ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 15.10.2003 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ದಾನವಾಗಿ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇದ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II)ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ

ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರು ಹೆಸರುಘಟ್ಟ ಹೋಬಳಿ, ಹುರುಳಿ ಚಿಕ್ಕನಹಳ್ಳಿ ಗ್ರಾಮದ ಸ.ನಂ. 71 ರಲ್ಲಿ 8-30 ಎಕರೆ:ಗುಂಟೆ ಮತ್ತು 136/1 ರಲ್ಲಿ 1-00 ಎಕರೆ:ಗುಂಟೆ ಒಟ್ಟು 9-30 ಎಕರೆ: ಜಮೀನನ್ನು ಮಲ್ಲಿಗೆ ಎಜ್ಯುಕೇಷನ್ ಫೌಂಡೇಷನ್ ಟ್ರಸ್ಟ್, ನಂ. 31, ಕ್ರಿಸೆಂಟ್ ರಸ್ತೆ, ಬೆಂಗಳೂರು-560001 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.143 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್‌ಆರ್‌ಎಫ್:ಸಿಆರ್:90/04-05: ದಿನಾಂಕ: 27ನೇ ಡಿಸೆಂಬರ್ 2004**

**ವಿಷಯ :** ಭಾರತಿ ರೂರಲ್ ಡೆವಲಪ್‌ಮೆಂಟ್ ಎಜ್ಯುಕೇಷನಲ್ ಸೊಸೈಟಿ (ರಿ) ಹೆಬ್ಬಗೋಡಿ, ಎಲೆಕ್ಟ್ರಾನಿಕ್ ಸಿಟಿ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ತಿರುಪಾಳ್ಯ ಗ್ರಾಮದ ಸ.ನಂ. 30/29, 30/30, 30/31 ಮತ್ತು 30/25ಎ ರಲ್ಲಿ ಒಟ್ಟು 5-38 ಎಕರೆ: ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ಭಾರತಿ ರೂರಲ್ ಡೆವಲಪ್‌ಮೆಂಟ್ ಎಜ್ಯುಕೇಷನ್ ಸೊಸೈಟಿ (ರಿ) ಹೆಬ್ಬಗೋಡಿ, ಎಲೆಕ್ಟ್ರಾನಿಕ್ ಸಿಟಿ ಅಂಚೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ತಿರುಪಾಳ್ಯ ಗ್ರಾಮದ ಸ.ನಂ. 30/29, 30/30, 30/31 ಮತ್ತು 30/25ಎ ರಲ್ಲಿ ಒಟ್ಟು 5-38 ಎಕರೆ: ಗುಂಟೆ ಆನೇಕಲ್ ತಾಲ್ಲೂಕು, ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗರವರ ಪತ್ರದ ನಂ: ಎಲ್‌ಆರ್‌ಎಫ್ (109): ಸಿಆರ್ 44/04-05 ದಿನಾಂಕ: 13.12.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸ.ನಂ. 30/29, 30/30, 30/31 ಮತ್ತು 30/25ಎ ರಲ್ಲಿ ಒಟ್ಟು 5-38 ಎಕರೆ: ಗುಂಟೆ ಜಮೀನನ್ನು ಕ್ರಯಕ್ಕೆ ಪಡೆಯಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ಸಂಘ ಸಂಸ್ಥೆಗಳ ನೋಂದಣಾಧಿಕಾರಿಗಳ ಕಛೇರಿ, ಬೆಂಗಳೂರು ಈ ಕಛೇರಿಯಲ್ಲಿ ದಿನಾಂಕ: 4.8.1995 ರಂದು ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಕಂದಾಯ ಕಾಯ್ದೆ 1961 ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ತಿರುಪಾಳ್ಯ ಗ್ರಾಮದ ಸ.ನಂ. 30/29 ರಲ್ಲಿ 2-14 ಎಕರೆ:ಗುಂಟೆ, ಸ.ನಂ. 30/30 ರಲ್ಲಿ 2-13 ಎಕರೆ:ಗುಂಟೆ, ಸ.ನಂ. 30/31 ರಲ್ಲಿ 0-11 ಗುಂಟೆ ಮತ್ತು ಸ.ನಂ. 30/25ಎ ರಲ್ಲಿ 1-00 ಎಕರೆ ಒಟ್ಟು 5-38 ಎಕರೆ:ಗುಂಟೆ ಜಮೀನನ್ನು ಭಾರತಿ ರೂರಲ್ ಡೆವಲಪ್‌ಮೆಂಟ್ ಎಜ್ಯುಕೇಷನಲ್ ಸೊಸೈಟಿ (ರಿ) ಹೆಬ್ಬಗೋಡಿ, ಎಲೆಕ್ಟ್ರಾನಿಕ್ ಸಿಟಿ ಅಂಚೆ, ಆನೇಕಲ್ ತಾಲ್ಲೂಕು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001

ಬೆಂಗಳೂರು ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು:**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೇ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್.144 ವಿಶೇಷ ಜಿಲ್ಲಾಧಿಕಾರಿಗಳು (ಕಂ), ಬೆಂಗಳೂರು ಜಿಲ್ಲೆ, ಬೆಂಗಳೂರು.

**ಶಿಕ್ಷಣ ಇಲಾಖೆ**

**ಅಧಿಸೂಚನೆ**

**ಇಡಿ: 428 ಡಿಪಿಐ: 2003 ಬೆಂಗಳೂರು-1 ದಿನಾಂಕ: 6ನೇ ನವೆಂಬರ್ 2004**

**ವಿಷಯ :** ದಿನಾಂಕ: 1.1.2003ರಲ್ಲಿರುವಂತೆ ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಉಪ ನಿರ್ದೇಶಕರು, ಪದವಿ ಪೂರ್ವ ಮತ್ತು ವೃತ್ತಿ ಶಿಕ್ಷಣ ಇಲಾಖೆ ಇವರ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ.

ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪ ನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ದಿನಾಂಕ: 25.2.2004 ರಂದು ಅಧಿಸೂಚನೆ ಹೊರಡಿಸಿ ಬಾಧಿತರಾದವರಿಂದ ಆಕ್ಷೇಪಣೆಗಳನ್ನು ಈ ಅಧಿಸೂಚನೆ ಪ್ರಕಟಗೊಂಡ ಒಂದು ತಿಂಗಳೊಳಗಾಗಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಹಾಗೂ ಒಂದು ಪ್ರತಿಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ, ಶಿಕ್ಷಣ ಇಲಾಖೆ ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗೆ ಯಾವುದೇ ಅಧಿಕಾರಿಗಳು ಆಕ್ಷೇಪಣೆ ಸಲ್ಲಿಸಿರುವುದಿಲ್ಲವಾದ್ದರಿಂದ ಅನುಬಂಧದಲ್ಲಿರುವಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್. ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಸೇವೆಗಳು-1,2)

**ಅನುಬಂಧ**

**ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ವೃಂದದವರ ಅಂತಿಮ ಜೇಷ್ಠತಾ ಪಟ್ಟಿ ದಿನಾಂಕ: 1.1.2004 ರಲ್ಲಿರುವಂತೆ.**

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಾಂಶುಪಾಲರ ಸೇವೆಗೆ ಸೇರಿದ ದಿನಾಂಕ | ಉಪ ನಿರ್ದೇಶಕರ ಸೇವೆಗೆ ಸೇರಿದ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1. | ಕೆ. ಆನಂದ | 1-6-34 | 28-8-78 | ನಿವೃತ್ತಿ | 5-3-91 |
| 2. | ಎನ್. ಬಿ. ಹನುಮಂತರಾಯಪ್ಪ | 6-2-32 | 25-8-62 | 21-10-75 | 5-3-91 |
| 3. | ನರಸಿಂಹಯ್ಯ | 20-9-32 | 1-4-58 | 31-10-75 | 5-3-91 |
| 4. | ಎಂ. ವೈ. ದೊಡ್ಡಮನಿ | 8-4-33 | 18-7-55 | 11-12-75 | 5-3-91 |
| 5. | ಎನ್. ಎಸ್. ವೀರಭದ್ರಪ್ಪ | 9-11-33 | 16-2-61 | 3-11-75 | 5-3-91 |
| 6. | ಬಿ. ಎಸ್. ಶಿವಪ್ರಕಾಶನ್ | 12-2-34 | 8-7-54 | 6-11-75 | 5-3-91 |
| 7. | ಎಲ್. ಎಂ. ಪಾಲಾಕ್ಷಯ್ಯ | 22-4-34 | 12-8-59 | 29-11-75 | 5-3-91 |
| 8. | ಎಸ್. ಪಿ. ಕಡಿದಾಳ್ | 22-7-34 | 13-11-57 | 7-11-75 | 5-3-91 |
| 9. | ಬಿ. ಆರ್. ರಾಮಯ್ಯ | 28-7-34 | - | 3-11-75 | 5-3-91 |
| 10. | ಎಂ. ಎಂ. ಹಿರೇಮಠ | 19-8-34 | 1-6-61 | 7-11-75 | 24-8-91 |

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಾಂಶುಪಾಲರ ಸೇವೆಗೆ ಸೇರಿದ ದಿನಾಂಕ | ಉಪ ನಿರ್ದೇಶಕರ ಸೇವೆಗೆ ಸೇರಿದ ದಿನಾಂಕ |
|---|---|---|---|---|---|
| 11. | ಎಸ್. ನಂಜೇರಾಜ್ ಅರಸ್ | 10-1-35 | 11-7-60 | 31-10-75 | 24-8-91 |
| 12. | ಭೀಮರಾವ್ | 14-3-35 | 9-10-53 | 6-11-75 | 6-1-92 |
| 13. | ಪಿ. ನಾರಾಯಣಪ್ಪ | 8-4-35 | 31-10-75 | 30-10-75 | 6-1-92 |
| 14. | ಜಿ. ಲೀಲಾವತಿಬಾಯಿ | 23-12-35 | 10-7-59 | 31-10-75 | 6-1-92 |
| 15. | ಟಿ. ಸಿ. ವಸಂತರಾಜ್ ಅರಸ್ | 10-6-36 | 8-7-64 | 11-11-75 | 24-8-92 |
| 16. | ಸಿ.ಆರ್. ರಾಮೇಗೌಡ | 13-6-36 | 15-7-80 | 31-10-75 | 24-8-92 |
| 17. | ಪಿ. ಎಂ. ಕೃಷ್ಣಯ್ಯ | 4-12-36 | 17-2-57 | 7-11-75 | 24-8-92 |
| 18. | ಎಂ. ತಿಪ್ಪೇರುದ್ರಪ್ಪ | 10-1-37 | 17-8-64 | 31-10-75 | 12-5-93 |
| 19. | ಕೆ. ನಾರಾಯಣಸ್ವಾಮಿ | 2-4-37 | - | 10-12-75 | 12-5-93 |
| 20. | ಸಿ. ನಂಜುಂಡಸ್ವಾಮಿ | 12-5-47 | 5-3-65 | 6-11-75 | 12-5-93 |
| 21. | ಶಿವಲಿಂಗಯ್ಯ | 10-6-37 | 5-7-60 | 5-11-75 | 12-5-93 |
| 22. | ಟಿ. ಎನ್. ತಿಮ್ಮನಂಜಯ್ಯ | 25-10-37 | 14-8-63 | 31-10-75 | 12-6-93 |
| 23. | ಕೆ. ಗಂಗೇಗೌಡ | 27-2-38 | 1-7-63 | 12-11-75 | 12-5-93 |
| 24. | ಅಹೀರ್ ಸೈಫುಲ್ಲಾ ಫರೂಕಿ | 3-4-38 | 3-4-75 | 3-11-75 | 12-5-93 |
| 25. | ಪಿ. ಡಿ. ಬಟಾಡ್ | 14-6-38 | 25-11-75 | 25-11-75 | 12-5-93 |
| 26. | ಪುಟ್ಟಲಿಂಗಯ್ಯ | 6-9-38 | 17-8-66 | 5-11-75 | 12-5-93 |
| 27. | ಎನ್. ಹೇಮಪ್ಪ | 1-6-38 | 1-6-64 | 5-11-75 | 12-5-93 |
| 28. | ಆರ್. ಎನ್. ನಾಯಕ್ | 29-10-39 | 8-11-75 | 8-11-75 | 12-5-93 |
| 29. | ಪ್ರಾಂಕ್ಲಿನ್ ಹೇಮಚಂದ್ರ | 6-1-39 | 27-12-75 | 27-12-75 | 12-5-93 |
| 30. | ಟಿ. ಕೆ. ಶಂಕರರಾವ್ | 18-2-39 | 25-7-65 | 7-11-75 | 12-5-93 |
| 31. | ಡಿ.ಎಸ್. ಮ್ಯಾದರ್ | 8-5-39 | 14-9-66 | 7-11-75 | 12-5-93 |
| 32. | ಎನ್. ಹೆಚ್. ರುದ್ರಪ್ಪ | 16-5-39 | 6-11-75 | 6-11-75 | 12-5-93 |
| 33. | ಆರ್. ತಿಮ್ಮಯ್ಯ | 16-5-39 | 6-2-59 | 5-11-75 | 12-5-93 |
| 34. | ಬಿ. ಕೆ. ರಾಮಸ್ವಾಮಿ | 6-10-39 | 18-10-65 | 31-10-75 | 12-5-93 |
| 35. | ವಾಸುದೇವ ಮಂಡ್ರಾವಾಡ | 16-5-40 | 11-12-75 | 11-12-75 | 12-5-93 |
| 36. | ಶೀಲವಂತ ವೈಜನಾಥ | 6-10-40 | 1-8-67 | 3-11-75 | 12-5-93 |
| 37. | ಹೆಚ್. ಜಿ. ಮಹಾಬಲೇಶ್ವರ | 30-6-40 | 30-10-75 | 30-10-75 | 12-5-93 |
| 38. | ಹಬೀದುಲ್ಲಾಖಾನ್ | 3-11-40 | 11-12-75 | 11-12-75 | 12-5-93 |
| 39. | ಎಸ್. ವೈ. ಯಾರಗಲ್ | 10-4-41 | 6-11-75 | 6-11-75 | 12-5-93 |
| 40. | ಆರ್. ರಾಮಾನುಜಂ | 3-6-41 | 3-3-75 | 3-11-75 | 12-5-93 |
| 41. | ಟಿ. ಜಿ. ನಾಯಕ್ | 8-7-41 | 3-11-75 | 3-11-75 | 12-5-93 |
| 42. | ಎಸ್. ಬಿ. ಮಟ್ಟಿ | 6-4-42 | 27-11-79 | - | 12-5-93 |
| 43. | ಸಿ. ಎಸ್. ರಾಮಸ್ವಾಮಿ | 15-9-42 | 29-10-75 | 29-10-75 | 12-5-93 |
| 44. | ಹೆಚ್. ಪಿ. ಶಾಂತವೀರಪ್ಪ | 17-10-42 | 4-9-64 | 13-11-75 | 12-5-93 |
| 45. | ಬಿ. ಎಸ್. ಶ್ರೀಧರರಾಜ ಅರಸ್ | 11-8-43 | 3-11-68 | 8-11-75 | 12-5-93 |
| 46. | ಕೆ. ಬಿ. ಮರಿಯಪ್ಪ | 1-2-4 | 7-8-69 | 11-12-75 | 12-5-93 |
| 47. | ಚಿ. ಚೋಳಿ ಅಡಿವೆಪ್ಪ | 1-2-44 | 2-8-69 | 11-12-75 | 12-5-93 |
| 48. | ಎಸ್. ಆರ್. ಹೆಗಡೆ | 1-2-44 | 7-11-75 | 7-11-75 | 12-5-93 |
| 49. | ಎಸ್. ಬಿ. ವಾಸುದೇವ | 11-2-44 | 31-10-75 | 31-10-75 | 12-5-93 |
| 50. | ವಿ. ವಿ. ಕಟ್ಟಿ | 1-3-44 | 9-4-76 | 9-4-76 | 12-5-93 |
| 51. | ಟಿ. ಕೆ. ಜಾಫರ್ ಮೋಹಿದಿನ್ | 3-4-44 | 7-11-75 | 7-11-75 | 14-9-93 |
| 52. | ಆರ್. ಎಲ್. ಮಂಗಳೂರು | 14-9-44 | 1-7-75 | 2-12-75 | 13-11-93 |
| 53. | ಪಿ. ಹನುಮಂತಪ್ಪ | 16-10-44 | 31-10-75 | 31-10-75 | 13-11-93 |
| 54. | ಹೆಚ್. ಎಂ. ನಾಗರಾಜು | 4-3-45 | 20-11-75 | 20-11-75 | 13-11-93 |
| 55. | ಬಿ. ಸೈಯದ್ ಗಫೂರ್ ಬಿಜಲಿ | 2-11-42 | 23-10-79 | 23-10-79 | 11-8-94 |
| 56. | ಹೆಚ್. ಕಮಲಾಕರ ಹಾಲಂಬಿ | 12-8-46 | 12-7-73 | 15-7-81 | 11-8-94 |
| 57. | ಪಿ. ಎಸ್. ಸೂರ್ಯನಾರಾಯಣ ಕಾರಂತ | 16-12-45 | 23-7-73 | 15-7-81 | 11-8-94 |

| ಕ್ರ. ಸಂ. | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಾಂಶುಪಾಲರ ಸೇವೆಗೆ ಸೇರಿದ ದಿನಾಂಕ | ಉಪ ನಿರ್ದೇಶಕರ ಸೇವೆಗೆ ಸೇರಿದ ದಿನಾಂಕ |
|---|---|---|---|---|---|
| 58. | ಎಲ್. ನಾಗರಾಜಮೂರ್ತಿ | 3-11-49 | 4-7-73 | 15-7-81 | 20-3-95 |
| 59. | ಹೆಚ್. ಕೆ. ನಾರಾಯಣಮೂರ್ತಿ | 19-5-48 | 6-7-73 | 15-7-81 | 20-3-95 |
| 60. | ಎಸ್. ಎಸ್. ಗಿಡ್ಡೆ | 8-8-47 | 6-7-73 | 15-7-81 | 1-3-95 |
| 61. | ಹೆಚ್. ಟಿ. ಪವಾರ್ | 1-3-44 | 9-7-73 | 15-7-81 | 14-8-95 |
| 62. | ಎಸ್. ವಿಶ್ವನಾಥ್ | 1-8-46 | 9-7-73 | 15-7-81 | 10-7-95 |
| 63. | ಕೆ. ಅಬ್ದುಲ್ ಸಲೀಂ | 1-7-48 | 1-8-73 | 15-7-81 | 10-7-95 |
| 64. | ಎಸ್. ಬಸಪ್ಪ | 12-12-39 | 16-7-73 | 15-7-81 | 10-7-95 |
| 65. | ಎಲಿಜಬಿತ್ ಜೋಸೆಫ್ | 1-8-42 | 17-1-76 | 17-7-81 | 18-9-95 |
| 66. | ಹೆಚ್. ರಮಾದೇವಿ ಹಂಡೆ | 9-1-40 | 2-2-58 | 20-12-83 | 29-11-96 |
| 67. | ಸಿದ್ದರಸಯ್ಯ | 17-3-42 | 9-12-75 | 26-12-83 | 29-11-96 |
| 68. | ಎಂ. ಮಹಾದೇವಿ | 15-5-43 | 24-12-75 | 22-12-83 | 29-11-96 |
| 69. | ಬಿ. ಬಸವಯ್ಯ | 27-10-43 | 8-12-75 | 29-12-83 | 29-11-96 |
| 70. | ಪಿ. ಡಿ. ಬಾಡಕರ್ | 4-1-44 | 29-12-75 | 20-12-83 | 29-11-96 |
| 71. | ಕೆ. ಪುಟ್ಟಸ್ವಾಮಿ | 25-6-44 | 3-12-75 | 20-12-83 | 29-11-96 |
| 72. | ಆರ್. ಶ್ರೀನಿವಾಸಮೂರ್ತಿ | 20-11-44 | 5-12-75 | 20-12-83 | 29-11-96 |
| 73. | ಎಸ್. ಬಿ. ಹೊಸಮನಿ | 1-3-45 | 10-12-75 | 20-12-83 | 5-3-97 |
| 74. | ದೇವರಾಜು | 18-6-45 | 1-12-75 | 20-12-83 | 5-3-97 |
| 75. | ಎಂ. ಸಿ. ರಾಮಪ್ರಸಾದ್ | 6-2-46 | 1-12-75 | 20-12-83 | 1-1-98 |
| 76. | ಬಿ. ಆರ್. ಲಮಾಣಿ | 10-3-46 | 5-12-75 | 20-12-83 | 1-1-98 |
| 77. | ಎನ್. ಕೆ. ಸಾಕೇನವರ್ | 1-6-46 | 12-12-75 | 20-12-83 | 1-1-98 |
| 78. | ಬಿ. ರುದ್ರಪ್ಪ | 18-2-47 | 12-12-75 | 20-12-83 | 1-1-98 |
| 79. | ಸಿ. ರಾಧ | 18-5-75 | 15-12-75 | 20-12-83 | 1-1-98 |
| 80. | ಸಿ. ಮಹಾದೇವ | 1-6-47 | 5-12-75 | 20-12-83 | 6-3-98 |
| 81. | ಕೆ. ದೊರೈರಾಜ್ | 8-6-47 | 29-11-75 | 20-12-83 | 21-7-98 |
| 82. | ಗೋವಿಂದಯ್ಯ | 9-6-47 | 6-12-75 | 20-12-83 | 21-7-98 |
| 83. | ಆರ್. ಸರೋಜ | 10-7-47 | 4-12-75 | 20-12-83 | 21-7-98 |
| 84. | ಟಿ. ಆರ್. ಯಶೋಧರ | 15-7-47 | 3-12-75 | 20-12-83 | 14-3-2000 |
| 85. | ಶ್ರೀ ರಂಗರಾಜು | 12-1-48 | 12-1-75 | 20-12-83 | 14-3-2000 |
| 86. | ಆರ್. ಆರ್. ಮೂಲಿಮನಿ | 10-1-48 | 1-12-75 | 20-12-83 | 14-3-2000 |
| 87. | ಆರ್. ಪಿ. ಚವಾಣ | 1-3-48 | 24-12-75 | 20-12-83 | 14-3-2000 |
| 88. | ಎಸ್. ಪಿ. ನಾಯಕ | 24-3-48 | 4-12-75 | 20-12-83 | 6-9-2000 |
| 89. | ಬಿ. ಎನ್. ಕೃಷ್ಣಪ್ಪ | 1-4-48 | 9-12-75 | 20-12-83 | 6-9-2000 |
| 90. | ಪಿ. ಡಿ. ಕುಮಾರಸ್ವಾಮಿ | 10-4-48 | 5-12-75 | 20-12-83 | 6-8-2001 |
| 91. | ಸಿ. ಆರ್. ರಂಗಸ್ವಾಮಿ | 5-2-48 | 4-12-75 | 20-12-83 | 6-8-2001 |
| 92. | ಆರ್. ಎಂ. ಮಾಡಲಗೇರಿ | 20-11-47 | 4-12-75 | 18-8-84 | 6-8-2001 |
| 93. | ಎಸ್. ಸಿದ್ದನಂಜಪ್ಪ | 17-10-48 | 1-12-75 | 18-8-84 | 6-8-2001 |
| 94. | ಜಿ. ಮಹಾಲಿಂಗಂ | 6-1-49 | 8-12-75 | 18-8-84 | 6-8-2001 |
| 95. | ಬಿ. ಶಿವಣ್ಣ | 12-1-49 | 19-12-75 | 18-8-84 | 5-12-2001 |
| 96. | ಜಿ. ಆರ್. ನರಸಿಂಹಮೂರ್ತಿ | 9-10-46 | 15-7-81 | 15-7-81 | 3-10-2002 |
| 97. | ಹೆಚ್. ಕೆ. ಪ್ರಸನ್ನ ಕುಮಾರ್ | 10-3-49 | 27-12-75 | 18-8-84 | 3-10-2002 |
| 98. | ಡಿ. ಸಿದ್ದರಾಜು | 1-6-49 | 4-12-75 | 2-1-85 | 3-10-2002 |
| 99. | ಚನ್ನಕೇಶವನಾಯಕ | 8-6-49 | 24-12-75 | 2-1-85 | 3-10-2002 |
| 100. | ಎಸ್. ರಾಜೇಂದ್ರನ್ | 14-6-49 | 24-12-75 | 2-1-85 | 3-10-2002 |
| 101. | ಹೆಚ್. ಎಸ್. ರಮೇಶ್ | 2-7-49 | 1-12-75 | 2-1-85 | 3-10-2002 |

**ಎಫ್. ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ, (ಸೇವೆಗಳು-1,2)

ಪಿ.ಆರ್.145